


# ಕರ್ನಾಟಕ ವಿಧಾನ ಪರಿಷತ್ತು

## ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

## ಚುಕ್ಕೆ ರಹಿತ ಪ್ರಶ್ನೆ

ದಿನಾಂಕ : 17-03-2021 ಪ್ರಶ್ನೆ ಸಂಖ್ಯೆ : 1223 (1438)

ಸದಸ್ಯರ ಹೆಸರು ಮತ್ತು ಕ್ಷೇತ್ರ : ಶ್ರೀ ಕೆ. ಪ್ರತಾಪಚಂದ್ರ ಶೆಟ್ಟಿ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

ಉತ್ತರ ನೀಡಬೇಕಾದ ದಿನಾಂಕ : 17-03-2021

ಉತ್ತರಿಸುವ ಸಚಿವರು : ವಸತಿ ಸಚಿವರು

ವಿಷಯ : ವಸತಿ ಯೋಜನೆಯಲ್ಲಿ ಫಲಾನುಭವಿ ಆಯ್ಕೆ ಕುರಿತು

(ಅ) ಉಡುಪಿ ಮತ್ತು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಕಳೆದ ಮೂರು ವರ್ಷಗಳಲ್ಲಿ ವಿವಿಧ ವಸತಿ ಯೋಜನೆಯಡಿ ನಿರ್ಮಾಣಕ್ಕೆ ನಿರ್ದಿಷ್ಟಪಡಿಸಿದ ಮನೆಗಳ ಸಂಖ್ಯೆ ಎಷ್ಟು; ಆಯ್ಕೆ ಮಾಡಲಾದ ಫಲಾನುಭವಿಗಳ ಸಂಖ್ಯೆ ಎಷ್ಟು; ಬಿಡುಗಡೆಗೆ ಮಾಡಲಾದ ಅನುದಾನವೆಷ್ಟು; ಬಿಡುಗಡೆಗೆ ಬಾಕಿಯಿರುವ ಅನುದಾನವೆಷ್ಟು; ಅನುದಾನ ಬಿಡುಗಡೆಗೆ ಇರುವ ಸಮಸ್ಯೆಗಳಾವುವು; (ಜಿಲ್ಲಾವಾರು, ತಾಲ್ಲೂಕುವಾರು ಮತ್ತು ಗ್ರಾಮಪಂಚಾಯಿತಿವಾರು ಮಾಹಿತಿ ನೀಡುವುದು)

(ಆ) ಸಾಮಾನ್ಯ ವರ್ಗದಲ್ಲಿ ಅಲ್ಪಸಂಖ್ಯಾತರಿಗೆ ವಸತಿಯನ್ನು ಮಂಜೂರಾತಿ ಮಾಡಲು ನಿಗಮದ ವೆಬ್ ಸೈಟ್ ನಿರ್ಬಂಧಿಸಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಕಳೆದ ಮೂರು ವರ್ಷಗಳಿಂದ ಅಲ್ಪಸಂಖ್ಯಾತರಿಗೆ ವಸತಿ ಸೌಲಭ್ಯ ಪಡೆಯಲು ಅನಾನುಕೂಲವಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ;

(ಇ) ರಾಜ್ಯದಲ್ಲಿ 10-15 ವರ್ಷಗಳ ಹಿಂದೆ ಮನೆ ದುರಸ್ಥಿಗೆ 150000 ಕನಿಷ್ಠ ಸಹಾಯಧನ ಪಡೆದ ಫಲಾನುಭವಿಗಳು ಈಗ ಮನೆ ಶಿಥಿಲಾವಸ್ಥೆಯನ್ನು ತಲುಪಿದ್ದರೂ ಹೊಸಮನೆ ಪಡೆಯಲು ಅನರ್ಹತೆಗೊಳ್ಳುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ನೈಜ ಫಲಾನುಭವಿಗೆ ಅವಕಾಶ ಕಲ್ಪಿಸಲು ಸರ್ಕಾರದ ಕ್ರಮವೇನು ?